ತಿರುಪತಿ ವೆಂಕಟರಮಣ
ರಾಗ : ಖರಹರಪ್ರಿಯಾ
ತಾಳ : ಆದಿ
ರಚನೆ : ಪುರಂದರ ದಾಸರು

ತಿರುಪತಿ ವೆಂಕಟರಮಣ ನಿನಗೇತಕೆ ಬಾರದು ಕರುಣ । ಪ ।
ನಂಬಿದೆ ನಿನ್ನಯ ಚರಣ ಪರಿಪಾಲಿಸ ಬೇಕೋ ಕರುಣ ।ಅಪ।

ಅಳಗಿರಿಯಿಂದಲ್ಲಿ ಬಂದ ಸ್ವಾಮಿ ಅಂಜನಗಿರಿಯಲಿ ನಿಂದ
ಕೊಳಲೂದೋ ಧ್ವನಿ ಚಂದ ನಮ್ಮ ಕುಂಡಲರಾಯ ಮುಕುಂದ । ೧ ।

ಬೇಟೆಯಾಡುತ ಬಂದ ಸ್ವಾಮಿ ಬೆಟ್ಟದ ಮೇಲೆ ನಿಂದ
ವೀಟುಗಾರ ಗೋವಿಂದ ಅಲ್ಲಿ ಜೇನು ಸಕ್ಕರೆಯನು ತಿಂದ । ೨ ।

ಮೂಡಲ ಗಿರಿಯಲಿ ನಿಂದ ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತ ಈರೇಳು ಲೋಕಕನಂತ । ೩ ।

ಆಡಿದರೆ ಸ್ಥಿರವಪ್ಪ ಅಭದ್ದಗಳಾಡಲು ಒಪ್ಪ
ಬೇಡಿದ ವರಗಳಿನಿಪ್ಪ ನಮ್ಮ ಮೂಡಲಗಿರಿ ತಿಮ್ಮಪ್ಪ । ೪ ।

ಅಪ್ಪವು ಅತಿರಸ ಮೆತ್ತ ಸ್ವಾಮಿ ಅಸುರರ ಕಾಲಲಿ ಒದ್ದ
ಸತಿಯ ಕೂಡಾಡುತಲಿದ್ದ ಸ್ವಾಮಿ ಸಕಲ ದುರ್ಜನರನು ಗೆದ್ದ । ೫ ।

ಬಗೆ ಬಗೆ ಭಕ್ಷ್ಯ ಪರಮಾನ್ನ ನಾನಾ ಬಗೆಯ ಸಕಲ ಶಾಲ್ಯನ್ನ
ಬಗೆ ಬಗೆ ಸೊಬಗು ಮೋಹನ್ನ ನಮ್ಮ ನಗುಮುಖದ ಸುಪ್ರಸನ್ನ । ೬ ।

ಕಾಶಿ ರಾಮೇಶ್ವರದಿಂದ ಅಲ್ಲಿ ಕಾಣಿಕೆ ಬರುವುದು ಚಂದ
ದಾಸರ ಕೂಡೆ ಗೋವಿಂದ ಅಲ್ಲಿ ದಾರಿ ನಡೆವುದೆ ಚಂದ । ೭ ।

ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ
ಬಲ್ಲಿದವರಿಗೆ ಉದ್ದಂಡ ಶಿವ ಬಿಲ್ಲ ಮುರಿದ ಪ್ರಚಂಡ । ೮ ।

ಕಾಸು ತಪ್ಪಿದರೆ ಪಟ್ಟಿ ಬಟ್ಟಿ ಕಾಸು ಬಿಡದೆ ಕಂಡು ಕಟ್ಟಿ
ದಾಸನೆಂದರೆ ಬಿಡ ಗಟ್ಟಿ ನಮ್ಮ ಕೇಸಕ್ಕಿ ತಿಮ್ಮಪ್ಪಶೆಟ್ಟಿ । ೯ ।

ದಾಸರ ಕಂಡರೆ ಪ್ರಾಣ ತಾ ಧರೆಯೊಳಧಿಕ ಪ್ರವೀಣ
ದ್ವೇಷಿಯ ಗಂಡಲ ಕಾಣ ನಮ್ಮ ದೇವಗೆ ನಿತ್ಯ ಕಲ್ಯಾಣ । ೧೦ ।

ಮೋಸ ಹೋಗುವನಲ್ಲಯ್ಯ ಒಂದು ಕಾಸಿಗೆ ಒಡ್ಡುವ ಕೈಯ್ಯ
ಏಸು ಮಹಿಮೆಗಾರನಯ್ಯ ನಮ್ಮ ವಾಸುದೇವ ತಿಮ್ಮಯ್ಯ । ೧೧ ।

ಚಿತ್ತಾವಧಾನ ಪರಾಕು ನಿನ್ನ ಚಿತ್ತದ ದಯ ಒಂದೇ ಸಾಕು
ಸತ್ಯವಾಹಿನಿ ನಿನ್ನ ವಾಕು ನೀನು ಸಕಲ ಜನರಿಗೆ ಬೇಕು । ೧೨ ।

ಅಲ್ಲಲ್ಲಿ ಪರಿಷೆಯ ಗುಂಪು ಮತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮತ್ತಲ್ಲಲ್ಲಿ ಪರಿಮಳದಿಂಪು । ೧೩ ।

ಅಲ್ಲಲ್ಲಿ ಜನಗಳ ಕೂಡ ಮತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮತ್ತಲ್ಲಲ್ಲಿ ಊರಿಗೆ ಓಟ । ೧೪ ।

ಪಾಪ ವಿನಾಶಿನಿ ಸ್ನಾನ ಹರಿ ಪಾದೋದಕವೆ ಪಾನ
ಕೋಪ ತಾಪಗಳ ನಿಧಾನ ನಮ್ಮ ಪುರಂದರ ವಿಟ್ಟಲನ ಧ್ಯಾನ । ೧೫ ।